ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 540
2.. ಸದಸ್ಯರ ಹೆಸರು : ಶ್ರೀ ಜಿ. ರಘು ಆಚಾರ್, (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
3. ಉತ್ತರಿಸುವ ದಿನಾಂಕ : 24-09-2020
4. ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬಿಬಿಎಂಪಿ ವ್ಯಾಪ್ತಿಗೆ ಬರುವ ಬೆಳ್ಳಂದೂರು ಔಟರ್‌ರಿಂಗ್ ರಸ್ತೆಯಿಂದ ಅಂಬಲೀಪುರಕ್ಕೆ ಹೋಗುವ ರಸ್ತೆ ಹದಗೆಟ್ಟಿದ್ದು ಅಪಘಾತ ಸಂಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಅದರ ದುರಸ್ತಿಗೆ ಸರ್ಕಾರ ವಹಿಸಿರುವ ಕ್ರಮವೇನು; | ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು 110 ಹಳ್ಳಿಗಳ ಯೋಜನೆಯಲ್ಲಿ ನೀರು ಸರಬರಾಜು ಮತ್ತು ಒಳಚರಂಡಿ ಕೊಳವೆ ಅಳವಡಿಸಲು ರಸ್ತೆ ಅಗೆದಿರುವುದರಿಂದ ಬೆಳ್ಳಂದೂರು ಔಟರ್‌ರಿಂಗ್ ರಸ್ತೆಯಿಂದ ಅಂಬಲೀಪುರಕ್ಕೆ ಹೋಗುವ ರಸ್ತೆ ಹದಗೆಟ್ಟಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br><br>ಪ್ರಸ್ತಾಪಿತ ರಸ್ತೆಯನ್ನು ದುರಸ್ಥಿಪಡಿಸಲು ಬಿಬಿಎಂಪಿ ಯು ಕ್ರಮವಹಿಸಿದ್ದು, ಸರ್ಕಾರವು 2019-20ನೇ ಸಾಲಿನ **"ಮುಖ್ಯಮಂತ್ರಿಗಳ ನವ ನಗರೋತ್ಥಾನ"** ಯೋಜನೆಯಡಿಯಲ್ಲಿ ಸದರಿ ರಸ್ತೆ ಅಭಿವೃದ್ಧಿಗೆ ರೂ.1.60 ಕೋಟಿಗಳ ಅನುದಾನ ಹಂಚಿಕೆ ಮಾಡಿದ್ದು, ಸದರಿ ಕಾಮಗಾರಿಯನ್ನು ಕೈಗೊಳ್ಳಲು ಈಗಾಗಲೇ ಮೆ॥ ಕೆ.ಆರ್.ಐ.ಡಿ.ಎಲ್ ಸಂಸ್ಥೆಗೆ ದಿನಾಂಕ: 06-02-2020 ರಂದು ಕಾರ್ಯಾದೇಶ ನೀಡಲಾಗಿರುತ್ತದೆ. |
| ಆ | ಬಿಬಿಎಂಪಿ ಮುಂದೆ ರಸ್ತೆ ದುರಸ್ತಿಯ ಪ್ರಸ್ತಾವನೆ ಇದೆಯೇ; ಇದ್ದಲ್ಲಿ, ಅನುಷ್ಠಾನ ಮಾಡುವುದು ಯಾವಾಗ? (ಮಾಹಿತಿ ಒದಗಿಸುವುದು) | ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ 110 ಹಳ್ಳಿಗಳ ಯೋಜನೆಯಡಿ ನೀರು ಸರಬರಾಜು ಮತ್ತು ಒಳಚರಂಡಿ ಕೊಳವೆ ಅಳವಡಿಸುವ ಕಾಮಗಾರಿಯನ್ನು ಕೈಗೊಂಡಿದ್ದು, ಸದರಿ ಕೊಳವೆ ಅಳವಡಿಸುವ ಕಾಮಗಾರಿಯನ್ನು 15ನೇ ಅಕ್ಟೋಬರ್ 2020 ರೊಳಗಾಗಿ ಪೂರ್ಣಗೊಳಿಸುವುದಾಗಿ ಜಲಮಂಡಳಿಯು ತಿಳಿಸಿದ್ದು, ಸದರಿ ಪೈಪ್‌ಲೈನ್ ಕಾಮಗಾರಿ ಪೂರ್ಣಗೊಂಡ ನಂತರ ಪಾಲಿಕೆಯ ವತಿಯಿಂದ ರಸ್ತೆ ದುರಸ್ತಿ ಕಾಮಗಾರಿಯನ್ನು ನಿಯಮಾನುಸಾರ ಕೈಗೊಳ್ಳಲಾಗುತ್ತದೆ. |

**ಸಂಖ್ಯೆ: ನಅಇ 191 ಎಂಎನ್‌ವೈ 2020**

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್. ಯಡಿಯೂರಪ್ಪ)

ಮುಖ್ಯಮಂತ್ರಿ